# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | 479 |
| **ಸದಸ್ಯರ ಹೆಸರು** | ಶ್ರೀ ಕೆ.ಎ. ತಿಪ್ಪೇಸ್ವಾಮಿ<br>(ನಾಮನಿರ್ದೇಶನ ಹೊಂದಿದವರು) |
| **ಉತ್ತರಿಸಬೇಕಾದ ದಿನಾಂಕ** | 21.02.2022 |
| **ಉತ್ತರಿಸಬೇಕಾದ ಸಚಿವರು** | ಮಾನ್ಯ ಉನ್ನತ ಶಿಕ್ಷಣ, ಐಟಿ ಬಿಟಿ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ವಿದ್ಯುನ್ಮಾನ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು. |
| **ಪ್ರಶ್ನೆ** | **ಉತ್ತರ** |
| ಅ) ರಾಜ್ಯದಲ್ಲಿ ಕೇಂದ್ರ ಸರ್ಕಾರದ ನೆರವಿನೊಂದಿಗೆ ಮಾಹಿತಿ ತಂತ್ರಜ್ಞಾನ ಬಂಡವಾಳ ಹೂಡಿಕೆ ವಲಯ (Information Technology Investment Region-ITIR)ವನ್ನು ಬೆಂಗಳೂರು ಅಂತರಾಷ್ಟ್ರೀಯ ಸರಹದ್ದಿನಲ್ಲಿ ಸ್ಥಾಪಿಸಲು ಉದ್ದೇಶಿಸಿದೆಯೇ; ಹಾಗಿದ್ದಲ್ಲಿ, ಈ ವಲಯ ಸ್ಥಾಪನೆಗೆ ಸಂಬಂಧಿಸಿದ ರೂಪು-ರೇಷಗಳು ಯಾವುವು ಮತ್ತು ವಲಯ ಸ್ಥಾಪನೆಗೆ ಅಗತ್ಯವಿರುವ ಜಮೀನನ್ನು ಸ್ವಾಧೀನ ಪಡಿಸಿಕೊಳ್ಳಲಾಗಿದೆಯೇ; (ಪೂರ್ಣ ಮಾಹಿತಿ ನೀಡುವುದು) | ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ಒದಗಿಸಿದ ಮಾಹಿತಿಯಂತೆ ಬೆಂಗಳೂರು ಅಂತರಾಷ್ಟ್ರೀಯ ವಿಮಾಣ ನಿಲ್ದಾಣ ಸಮೀಪ (Information Technology Investment Region –ITIR) ಯೋಜನೆಗಾಗಿ ದೇವನಹಳ್ಳಿ ಮತ್ತು ದೊಡ್ಡಬಳ್ಳಾಪುರ ತಾಲ್ಲೂಕಿನ ಕೆಲವು ಗ್ರಾಮಗಳಲ್ಲಿನ ಸುಮಾರು 10000 ಎಕರೆ ಜಮೀನನ್ನು ಸ್ವಾಧೀನಪಡಿಸಲು ದಿನಾಂಕ: 05.10.2009ರಂದು ಜರುಗಿದ ಸದರಿ ಮಂಡಳಿ ಸಭೆಯಲ್ಲಿ ನಿರ್ಣಯಿಸಲಾಗಿದೆ.<br>ಸದರಿ ನಿರ್ಣಯದಂತೆ ಪ್ರಸ್ತಾವಿತ ಯೋಜನೆಗಾಗಿ ಮೊದಲ ಹಂತದಲ್ಲಿ ಒಟ್ಟು 2100-00 ಎಕರೆ ಜಮೀನನ್ನು ಸ್ವಾಧೀನಪಡಿಸುವಂತೆ ಮೆ॥ ಕಿಯೋನಿಕ್ಸ್ ಸಂಸ್ಥೆಯು ಕೋರಿಕೆ ಸಲ್ಲಿಸಿ ಈ ಬಾಬ್ತು ತಾತ್ಕಾಲಿಕ ಭೂ ಮೌಲ್ಯ ಒಟ್ಟು ರೂ. 20.00 ಕೋಟಿಗಳನ್ನು ದಿನಾಂಕ: 07.05.2010ರಂದು ಮಂಡಳಿಗೆ ಠೇವಣಿ ಮಾಡಿದೆ.<br>ತದನಂತರ, ಪ್ರಸ್ತಾವಿತ ಯೋಜನೆಗಾಗಿ ದೇವನಹಳ್ಳಿ ತಾಲ್ಲೂಕಿನ್ತ ಕುಂದಾಣ ಹೋಬಳಿಯ ರಬ್ಬನಹಳ್ಳಿ, ರಾಮನಾಥಪುರ, ಅರವನಹಳ್ಳಿ, ದೊಡ್ಡಗೊಲ್ಲಹಳ್ಳಿ, ಚಪ್ಪರದಹಳ್ಳಿ, ಬೈರದೇನಹಳ್ಳಿ ಮತ್ತು ದೊಡ್ಡಬಳ್ಳಾಪುರ ತಾಲ್ಲೂಕು, ಲಿಂಗನಹಳ್ಳಿ ಗ್ರಾಮಗಳಲ್ಲಿನ ಒಟ್ಟು 2072-24 ಎಕರೆ ಜಮೀನನ್ನು ಸ್ವಾಧೀನಪಡಿಸಿಕೊಳ್ಳಲು ದಿನಾಂಕ: |

| | |
|---|---|
| | 10.06.2010ರಂದು ಪ್ರಾಥಮಿಕ ಅಧಿಸೂಚನೆ ಹೊರಡಿಸಲಾಗಿದೆ. ಪ್ರಸ್ತಾವಿತ ಭೂಸ್ವಾಧೀನ ವೆಚ್ಚದ ಬಾಬ್ತು ಶೇ.40ರಷ್ಟು ತಾತ್ಕಾಲಿಕ ಮೊಬಲಗು ರೂ. 207.98 ಕೋಟಿ ಹಣವನ್ನು ಮೆ\|\| ಕಿಯೋನಿಕ್ಸ್ ಸಂಸ್ಥೆಯು ಮಂಡಳಿಗೆ ಠೇವಣಿ ಮಾಡಿರದ ಕಾರಣ ಸದರಿ ಯೋಜನೆಗೆ ಭೂಸ್ವಾಧೀನ ಪ್ರಕ್ರಿಯೆಯನ್ನು ಕೈಬಿಡಲಾಗಿತ್ತು. ಸದರಿ ಜಮೀನು ಭೂಸ್ವಾಧೀನ ಬಗ್ಗೆ ಸ್ಥಳೀಯ ರೈತರು ವಿರೋಧ ವ್ಯಕ್ತಪಡಿಸಿರುವುದರಿಂದ ಭೂಸ್ವಾಧೀನ ಪ್ರಕ್ರಿಯೆಯನ್ನು ಮಂಡಳಿ ವತಿಯಿಂದ ಅಂತಿಮಗೊಳಿಸಿ ಕೈಗಾರಿಕಾ ಪ್ರದೇಶವನ್ನಾಗಿ ಅಭಿವೃದ್ಧಿಪಡಿಸಲು ದಿನಾಂಕ:13.03.2012ರಂದು ಜರುಗಿದ ಮಂಡಳಿ ಸಭೆಯಲ್ಲಿ ನಿರ್ಣಯಿಸಲಾಗಿದೆ. |
| ಆ) ರಾಜ್ಯದಲ್ಲಿ ಈ ಉದ್ದೇಶಿತ ವಲಯದಲ್ಲಿ ಉದ್ಯಮಗಳನ್ನು ಸ್ಥಾಪಿಸಲು ಯಾವ - ಯಾವ ಮಾಹಿತಿ ತಂತ್ರಜ್ಞಾನ ಸಂಸ್ಥೆಗಳಿಗೆ ಜಮೀನು ಹಂಚಿಕೆ ಮಾಡಲಾಗಿದೆ ಮತ್ತು ಎಷ್ಟು ಸಂಸ್ಥೆಗಳು ಈಗಾಗಲೇ ಕಾರ್ಯ ನಿರ್ವಹಿಸುತ್ತಿವೆ? (ಪೂರ್ಣ ಮಾಹಿತಿ ನೀಡುವುದು) | ಉದ್ಭವಿಸುವುದಿಲ್ಲ. |

ಐಟಿಬಿಟಿ 15 ಎಲ್ ಸಿಎಂ 2022

**(ಡಾ\|\| ಸಿ. ಎನ್. ಅಶ್ವಥ್ ನಾರಾಯಣ)**
ಉನ್ನತ ಶಿಕ್ಷಣ, ಐಟಿ-ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ,
ವಿದ್ಯುನ್ಮಾನ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು.